# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1375 |
| ಮಾನ್ಯ ವಿಧಾನ ಪರಿಷತ್ ಸದಸ್ಯರು | ಶ್ರೀ ಕೆ.ಎ. ತಿಪ್ಪೇಸ್ವಾಮಿ |
| ಉತ್ತರಿಸಬೇಕಾದ ದಿನಾಂಕ | 23.09.2021 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಣ್ಣ ನೀರಾವರಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯ ಸರ್ಕಾರದ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆಗಳ ಅಡಿಯಲ್ಲಿರುವ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ಸ್ಥಾಪನೆ, ಧ್ಯೇಯೋದ್ದೇಶ ಮತ್ತು ಕಾರ್ಯ ಸ್ವರೂಪಗಳೇನು; (ಪೂರ್ಣ ವಿವರ ನೀಡುವುದು) | **i)ಸ್ಥಾಪನೆ**: ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯು (ಕಾಸಂಸು) ಕಾನೂನು ಇಲಾಖೆಯ ಒಂದು ಅಂಗ ಸಂಸ್ಥೆಯಾಗಿದೆ. ಈ ಸಂಸ್ಥೆಯನ್ನು ಸರ್ಕಾರದ ಆದೇಶ ಸಂಖ್ಯೆ. ಸಂವ್ಯಶಾಇ 88 ಆಡಳಿತ 2005 (ಭಾಗ), ಬೆಂಗಳೂರು, ದಿನಾಂಕ: 06.08.2005ರಂದು ಅಸ್ತಿತ್ವಕ್ಕೆ ಬಂದಿದೆ.<br><br>**ii) ಈ ಸಂಸ್ಥೆಯ ಧ್ಯೇಯೋದ್ದೇಶಗಳು ಈ ಕೆಳಕಂಡಂತಿವೆ**:<br>**ಎ)** ಜನ ಸಾಮಾನ್ಯರಿಗೆ ಹಾಗೂ ಕಾನೂನು ವಿದ್ಯಾರ್ಥಿಗಳಿಗೆ ಕಾನೂನು ಜಾಗೃತಿ, ಸುಧಾರಣೆಗೆ ಅನುವಾಗುವಂತೆ ಸಮಾವೇಶಗಳು, ವಿಚಾರ ಸಂಕಿರಣಗಳು, ಅಣುಕು ಸಂಸತ್ ಹಾಗೂ ವಿಧಾನಸಭಾ ಅಧಿವೇಶನಗಳು ಮತ್ತು ಶಾಸನೀಯ ವರ್ತಮಾನ ವೇದಿಕೆಗಳನ್ನು ಸಂಘಟಿಸುವುದು;<br><br>**ಬಿ)** ಶಾಸನೀಯ ಹಾಗೂ ಸಾಕ್ಷರತೆಯನ್ನು ವೃದ್ಧಿಸುವ ಸಂಶೋಧನಾ ಪ್ರಬಂಧಗಳನ್ನು, ಕೈಪಿಡಿಗಳನ್ನು, ನಿಯತಕಾಲಿಕೆಗಳು ಮತ್ತು ವೃತ್ತ ಪತ್ರಿಕೆಗಳನ್ನು ಪ್ರಕಟಗೊಳಿಸುವುದು;<br><br>**ಸಿ)** ಸಂಸದೀಯ ನಡವಳಿಕೆಗಳ ಅಧ್ಯಯನ ಮತ್ತು ಸುಧಾರಣೆಗೆ ಅವಕಾಶ ಮಾಡುವುದು;<br><br>**ಡಿ)** ನ್ಯಾಯ ನಿರ್ಣಯಗಳ ಕೋಶಗಾರವನ್ನು ಸಂಸ್ಥಾಪಿಸಿ ಸಾಮಾಜಿಕ ನೀತಿ ಮತ್ತು ಶಾಸನೀಯ ಉದ್ದೇಶಗಳಿಗೆ ಈ ತೀರ್ಪುಗಳ ಅನುಗುಣತ್ವದ ವಿಮರ್ಶಾತ್ಮಕ ಮಾಪನವನ್ನು ಅಧ್ಯಯನ ಸಮೂಹಗಳು ಹಮ್ಮಿಕೊಳ್ಳುವಂತೆ ವ್ಯವಸ್ಥೆ ಮಾಡುವುದರೊಂದಿಗೆ ಜನತೆಯಲ್ಲಿ ಈ ಬಗ್ಗೆ ಜಾಗೃತಿ ಮೂಡಿಸುವುದು;<br><br>**ಇ)** ಸಾಮಾಜಿಕ ಪ್ರಗತಿಗಾಗಿ ಅವಶ್ಯವಾಗುವ ಹೊಸ ಹೊಸ ಕಾನೂನುಗಳ ರಚನೆಗೆ ಸರ್ಕಾರಕ್ಕೆ ಸಲಹೆ ನೀಡುವುದು; |

<table>
<tr>
<td>(ಆ)</td>
<td>ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆ ಕಾರ್ಯ ನಿರ್ವಹಣೆಗೆ ಇರುವ ಮಂಡಳಿಗಳು ಯಾವುವು; (ಪೂರ್ಣ ವಿವರ ನೀಡುವುದು)</td>
<td>
i) ಆಡಳಿತ ಪರಿಷತ್<br>
ಸಂಸ್ಥೆಯ ಆಡಳಿತವು ಆಡಳಿತ ಪರಿಷತ್‌ನಲ್ಲಿ ವಿಹಿತವಾಗಿದ್ದು ಸಮಿತಿಯು ಈ ಕೆಳಕಂಡಂತೆ ಇದೆ.
<table>
<tr><td>ಎ)</td><td>ಸನ್ಮಾನ್ಯ ಮುಖ್ಯಮಂತ್ರಿಗಳು ಕರ್ನಾಟಕ ಸರ್ಕಾರ</td><td>ಅಧ್ಯಕ್ಷರು</td></tr>
<tr><td>ಬಿ)</td><td>ಸನ್ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು</td><td>ಉಪಾಧ್ಯಕ್ಷರು</td></tr>
<tr><td>ಸಿ)</td><td>ಸರ್ಕಾರದ ಮುಖ್ಯ ಕಾರ್ಯದರ್ಶಿಗಳು</td><td>ಸದಸ್ಯರು</td></tr>
<tr><td>ಡಿ)</td><td>ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿಗಳು</td><td>ಸದಸ್ಯರು</td></tr>
<tr><td>ಇ)</td><td>ಕಾನೂನು ಇಲಾಖೆಯ ಕಾರ್ಯದರ್ಶಿಗಳು</td><td>ಸದಸ್ಯರು</td></tr>
<tr><td>ಎಫ್)</td><td>ಸಂಸದೀಯ ವ್ಯವಹಾರಗಳ ಇಲಾಖೆಯ ಕಾರ್ಯದರ್ಶಿಗಳು</td><td>ಸದಸ್ಯರು</td></tr>
<tr><td>ಜಿ) & ಹೆಚ್)</td><td>ಇತರೆ ಎರಡು ಜನ ಸಹಯೋಜಿತ ನಾಮನಿರ್ದೇಶಿತರು</td><td>ಸದಸ್ಯರು</td></tr>
<tr><td>ಐ)</td><td>ಸಂಸ್ಥೆಯ ನಿರ್ದೇಶಕರು</td><td>ಸದಸ್ಯ ಕಾರ್ಯದರ್ಶಿ</td></tr>
</table>
</td>
</tr>
<tr>
<td>(ಇ)</td>
<td>ಈ ಸಂಸ್ಥೆಯಿಂದ ಕಳೆದ ಮೂರು ವರ್ಷಗಳಲ್ಲಿ ಮತ್ತು ಪ್ರಸ್ತುತ ವರ್ಷದಲ್ಲಿ ನಡೆಸಿರುವ ಕಾರ್ಯ ಚಟುವಟಿಕೆಗಳು ಯಾವುವು; (ಪೂರ್ಣ ವಿವರ ನೀಡುವುದು)</td>
<td>
<table>
<tr><td>1)</td><td>2018-19ನೇ ಸಾಲಿನಲ್ಲಿ ವಿಚಾರ ಸಂಕಿರಣಗಳು<br>ಮತ್ತು ಮಾದರಿ ವಿಧಾನಸಭಾ ಅಧಿವೇಶನ ಸ್ಪರ್ಧೆ</td><td>13<br>03</td></tr>
<tr><td>2)</td><td>2019-20ನೇ ಸಾಲಿನಲ್ಲಿ ವಿಚಾರ ಸಂಕಿರಣ / ಕಾರ್ಯಾಗಾರ</td><td>12</td></tr>
<tr><td>3)</td><td>2020-21ನೇ ಸಾಲಿನಲ್ಲಿ ಕಾರ್ಯಕ್ರಮಗಳು<br>ಕೋವಿಡ್-19ರ ಸಾಂಕ್ರಾಮಿಕ ವೈರಸ್ ಕಾರಣದಿಂದ ಕಾರ್ಯಕ್ರಮಗಳು ಕುಂಠಿತವಾಗಿದೆ<br>(ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ)</td><td>02</td></tr>
</table>
</td>
</tr>
</table>

| | | |
|---|---|---|
| (ಈ) | ಈ ಸಂಸ್ಥೆಯಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನುಷ್ಠಾನಗೊಳಿಸುವ ಮತ್ತು ಹೊಸದಾಗಿ ಹೊರ ತರುವ ಕಾಯಿದೆಗಳಸ್ಥೂಲ ಪರಿಚಯವನ್ನು ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರು ಮತ್ತು ಶಾಸಕರುಗಳಿಗೆ ಪರಿಚಯಿಸುವ ಶಿಬಿರಗಳನ್ನು ನಡೆಸಲಾಗುತ್ತಿದೆಯೇ; ಇಲ್ಲದಿದ್ದಲ್ಲಿ, ಈ ಶಿಬಿರಗಳನ್ನು ನಡೆಸಲು ರಾಜ್ಯ ಸರ್ಕಾರ ಮುಂದಾಗುವುದೇ; | ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನುಷ್ಠಾನಗೊಳಿಸುವ ಮತ್ತು ಹೊಸದಾಗಿ ಹೊರ ತರುವ ಕಾಯಿದೆಗಳ ಸ್ಥೂಲ ಪರಿಚಯವನ್ನು ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರುಗಳಿಗೆ ಮಾತ್ರ ನಡೆಸಲಾಗಿದೆ. ಶಾಸಕರುಗಳಿಗೆ ಪರಿಚಯಿಸುವ ಶಿಬಿರಗಳನ್ನು ನಡೆಸಲು ಮುಂದಿನ ದಿನಗಳಲ್ಲಿ ಕ್ರಮವಹಿಸಲಾಗುವುದು. |
| (ಉ) | ಈ ಸಂಸ್ಥೆಯ ಕಾರ್ಯವ್ಯಾಪ್ತಿ ವಿಸ್ತರಿಸಲು ಮತ್ತು ಉತ್ತಮ ಸಂಸದೀಯ ಸುಧಾರಣಾ ಸಂಸ್ಥೆಯಾಗಿ ಕಾರ್ಯನಿರ್ವಹಿಸಲು ಒಂದು ಸ್ವಂತ ಸುಸಜ್ಜಿತ ಕಟ್ಟಡವನ್ನು ಸರ್ಕಾರ ಒದಗಿಸಲು ಮುಂದಾಗುವುದೇ? (ಪೂರ್ಣ ವಿವರ ನೀಡುವುದು) | ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯು ಪ್ರಸ್ತುತ ವಿಶ್ವೇಶ್ವರಯ್ಯ ಕೇಂದ್ರ (ದೊಡ್ಡ ಗೋಪುರ), ಡಾ: ಬಿ.ಆರ್. ಅಂಬೇಡ್ಕರ್ ವೀಧಿಯಲ್ಲಿನ ಮೂರನೇ ಮಹಡಿ ಮತ್ತು 11ನೇ ಮಹಡಿಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಸ್ವತಂತ್ರ ನಿರ್ವಹಣೆಗೆ ಸುಸಜ್ಜಿತ ಕಟ್ಟಡದ ಅಗತ್ಯವಿದೆ. ಸಂಸ್ಥೆಯಿಂದ ಪ್ರಸ್ತಾವನೆ ಸ್ವೀಕೃತಗೊಂಡ ನಂತರ ಈ ಬಗ್ಗೆ ಕ್ರಮವಹಿಸಲಾಗುವುದು. |

ಸಂಖ್ಯೆ: ಲಾ-ಎಲ್ಎಡಿ/304/2021

**(ಜೆ.ಸಿ. ಮಾಧುಸ್ವಾಮಿ)**
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು
ಹಾಗೂ ಸಣ್ಣ ನೀರಾವರಿ ಸಚಿವರು

**ಅನುಬಂಧ-1**

**(1) 2018-19ನೇ ಸಾಲಿನಲ್ಲಿ ವಿಚಾರ ಸಂಕಿರಣಗಳು ಮತ್ತು ಮಾದರಿ ವಿಧಾನಸಭಾ ಅಧಿವೇಶನ ಸ್ಪರ್ಧೆ.**

(ಅ)2018-19 ರಲ್ಲಿ ಈ ಕೆಳಕಂಡಂತೆ ವಿಚಾರ ಸಂಕಿರಣಗಳನ್ನು ರಾಜ್ಯದ ವಿವಿಧ ಭಾಗಗಳಲ್ಲಿ ಏರ್ಪಡಿಸಲಾಗಿದೆ. ಅವುಗಳ ವಿವರಗಳನ್ನು ಈ ಕೆಳಗೆ ನೀಡಲಾಗಿದೆ.

| ಕ್ರ ಸಂ | ಕಾಲೇಜಿನ ಹೆಸರು | ದಿನಾಂಕ | ವಿಷಯ |
|---|---|---|---|
| 1 | ಕಸ್ತೂರಿನಗರ ಮಹಿಳಾ ಸಮಾಜ (ರಿ) # ಸಿ.ಎ 8 (ಕ), 3ನೇ ಡಿ ಕ್ರಾಸ್, ಕಸ್ತೂರಿನಗರ, ಬೆಂಗಳೂರು | 13.10.2018 | ಮಹಿಳಾ ಕಾನೂನು |
| 2 | ಕೆ.ಎಲ್.ಇ ಸೊಸೈಟಿ ಕಾನೂನು ಕಾಲೇಜು, ಚಿಕ್ಕೋಡಿ | 17.11.2018 | ಆತ್ಮಹತ್ಯೆ ಪರಿಣಾಮ ಮತ್ತು ತಡೆಗಟ್ಟುವಿಕೆಯ ಕ್ರಮಗಳು |
| 3 | ಶ್ರೀ ಅಜ್ಜಂಪುರ ಸೂರಿ ಪ್ರತಿಷ್ಠಾನ, ಕಡೂರು | 26.12.2018 | ಮಹಿಳಾ ರಕ್ಷಣಾ ಕಾನೂನು – ಪರಿಣಾಮ ಮತ್ತು ಪರಿಹಾರಗಳು |
| 4 | ಗ್ರಾಹಕರ ಹಕ್ಕು, ಶಿಕ್ಷಣ ಮತ್ತು ಜಾಗೃತಿ ವೇದಿಕೆ (ಕ್ರಿಯೇಟ್), ಬೆಂಗಳೂರು ಮತ್ತು ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ರಾಮನಗರ | 06.02.2019 | ಪ್ರಜೆಗಳ ನಡಿಗೆ ಸಂವಿಧಾನದ ಕಡೆಗೆ |
| 5 | ಕೊಟ್ಟೂರೇಶ್ವರ ಪದವಿ ಮಹಾವಿದ್ಯಾಲಯ, ಕೊಟ್ಟೂರು | 09.02.2019 | ನಮ್ಮ ಸಂವಿಧಾನ ನಮ್ಮ ಹೆಮ್ಮೆ |
| 6 | ಕರ್ನಾಟಕ ಮುಸ್ಲಿಂ ಮಹಿಳಾ ಆಂದೋಲನಾ ಸಂಸ್ಥೆ, ಬೆಂಗಳೂರು ಹಾಗೂ ದಯಾನಂದ ಸಾಗರ ತಾಂತ್ರಿಕ ಮತ್ತು ನಿರ್ವಹಣಾ ಅಕಾಡೆಮಿ, ಬೆಂಗಳೂರು | 23.02.2019 | ನಮ್ಮ ಸಂವಿಧಾನ ನಮ್ಮ ಹೆಮ್ಮೆ |
| 7 | ಕೆ.ಎಲ್.ಇ ಸೋಸೈಟಿಯ ಕಲಾ ಮತ್ತು ವಾಣಿಜ್ಯ ಕಾಲೇಜು, ಗದಗ | 07.03.2019 | ನಮ್ಮ ಸಂವಿಧಾನ ನಮ್ಮ ಹೆಮ್ಮೆ |
| 8 | ಸಿ.ಜಿ.ಬೆಲ್ಲದ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಅಕ್ಕಿ ಆಲೂರು, ಹಾನಗಲ್ ತಾಲೂಕು, ಹಾವೇರಿ ಜಿಲ್ಲೆ | 08.03.2019 | ನಮ್ಮ ಸಂವಿಧಾನ ನಮ್ಮ ಹೆಮ್ಮೆ |
| 9 | ಸಮುದಾಯ ಕರ್ನಾಟಕ, ಪೂರ್ಣಪ್ರಜ್ಞನಗರ, ಉತ್ತರಹಳ್ಳಿ, ಬೆಂಗಳೂರು ಹಾಗೂ ಶ್ರೀಮತಿ ಇಂದಿರಾ ಗಾಂಧಿ ಮಹಿಳಾ ಪದವಿ ಕಾಲೇಜು, ಸಾಗರ | 12.03.2019 | ಸಂವಿಧಾನ ಓದು |

| | | | |
|---|---|---|---|
| 10 | ಬಿ.ಎಲ್.ಡಿ.ಇ ಸಂಸ್ಥೆಯ ಕಾನೂನು ಮಹಾವಿದ್ಯಾಲಯ, ಜಮಖಂಡಿ. | 14.03.2019 | ನಮ್ಮ ಸಂವಿಧಾನ ನಮ್ಮ ಹೆಮ್ಮೆ |
| 11 | ಸರ್ಕಾರಿ ಕಾನೂನು ಕಾಲೇಜು, ಹಾಸನ | 16.03.2019 | ಆತ್ಮಹತ್ಯೆ ಪರಿಣಾಮ ಮತ್ತು ತಡೆಗಟ್ಟುವಿಕೆಯ ಕ್ರಮಗಳು |
| 12 | ಆರ್.ವಿ.ಇನ್ಸಿಟ್ಯೂಟ್ ಆಫ್ ಲೀಗಲ್ ಸ್ಟಡೀಸ್, ಜಯನಗರ, ಬೆಂಗಳೂರು | 22.03.2019 | ನಮ್ಮ ಸಂವಿಧಾನ ನಮ್ಮ ಹೆಮ್ಮೆ |
| 13 | ವಿಜ್ಞಾನೇಶ್ವರ ಸರ್ಕಾರಿ ಕಾನೂನು ಕಾಲೇಜು, ಮರತೂರು, ಕಲಬುರಗಿ | 23.03.2019 | ಆತ್ಮಹತ್ಯೆ ಪರಿಣಾಮ ಮತ್ತು ತಡೆಗಟ್ಟುವಿಕೆಯ ಕ್ರಮಗಳು |

**(ಬ) 2018–19 ನೇ ಸಾಲಿನ ಮಾದರಿ ವಿಧಾನ ಸಭಾ ಅಧಿವೇಶನ ಸ್ಪರ್ಧೆ:**

| ಕ್ರ.ಸಂ | ವಲಯ | ಕಾಲೇಜು | ದಿನಾಂಕ | ಭಾಗವಹಿಸಿದ ಕಾಲೇಜುಗಳ ಸಂಖ್ಯೆ | ಭಾಗವಹಿಸಿದ ವಿದ್ಯಾರ್ಥಿಗಳ ಸಂಖ್ಯೆ | ಭಾಗವಹಿಸಿದ ಜಿಲ್ಲೆಗಳ ಹೆಸರು |
|---|---|---|---|---|---|---|
| 1 | ಧಾರವಾಡ | ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ, ಹುಬ್ಬಳ್ಳಿ | 03.8.2018 ಮತ್ತು 04.8.2018 | 15 | 105 | ಧಾರವಾಡ, ಶಿವಮೊಗ್ಗ, ಮೈಸೂರು ಹಾಗೂ ಕಲಬುರಗಿ |
| 2018–19ನೇ ಸಾಲಿನ ವಲಯ ಮಟ್ಟದ ಮಾದರಿ ವಿಧಾನ ಸಭಾ ಅಧಿವೇಶನ ಸ್ಪರ್ಧೆ ವಿವರ | | | | | | |
| 2 | ಬಾಗಲ ಕೋಟೆ | ಬಿ.ವ್ಹಿ.ವ್ಹಿ. ಸಂಘದ ಎಸ್.ಸಿ. ನಂದಿಮಠ ಕಾನೂನು ಕಾಲೇಜು, ಬಾಗಲಕೋಟೆ | 26.10.2018 ಮತ್ತು 27.10.2018 | 20 | 120 | ಬಾಗಲಕೋಟೆ |
| 3 | ರಾಯಚೂರು ಜಿಲ್ಲೆ | ಶ್ರೀ ಕನಕದಾಸ ಪದವಿ ಮಹಾವಿದ್ಯಾಲಂಮ, ಸಿಂಧನೂರು, ರಾಯಚೂರು ಜಿಲ್ಲೆ | 21.12.2018 ಮತ್ತು 22.12.2018 | 22 | 110 | ರಾಯಚೂರು |

| 2) 2019–20ನೇ ಸಾಲಿನ ವಿಚಾರ ಸಂಕಿರಣ/ಕಾರ್ಯಾಗಾರಗಳು | | | |
|---|---|---|---|
| ಕ್ರ ಸಂ | ಕಾಲೇಜಿನ ಹೆಸರು | ದಿನಾಂಕ | ವಿಷಯ |
| 1 | ಕರ್ನಾಟಕ ರಾಜ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಿಶ್ವವಿದ್ಯಾಲಯ, ಗದಗ | 30.05.2019, 31.05.2019 ಹಾಗೂ 01.06.2019 | ಸಂಯುಕ್ತ ರಾಷ್ಟ್ರಗಳ ಸುಸ್ಥಿರ ಅಭಿವೃದ್ಧಿ ಗುರಿಗಳು, ಬಾ–ಬಾಪು ಮತ್ತು ನಾಗರೀಕ ಸಮಾಜ |
| 2 | ಬೆಂಗಳೂರು ವಿಶ್ವವಿದ್ಯಾಲಯ, ರಾಷ್ಟ್ರೀಯ ಸೇವಾ ಯೋಜನೆ, ಎನ್.ಎಸ್.ಎಸ್. ಭವನ, ಜ್ಞಾನಭಾರತಿ ಆವರಣ, ಬೆಂಗಳೂರು | 04.11.2019 | ಮಾನವ ಹಕ್ಕುಗಳು |
| 3 | ರಾಮನಗರ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಜಿಲ್ಲಾ ನ್ಯಾಯಾಲಯದ ಕಟ್ಟಡ, ನ್ಯಾಯಾಲಯಗಳ ಸಂಕೀರ್ಣ, ರಾಮನಗರ | 09.11.2019 | ಲೈಂಗಿಕ ಕಿರುಕುಳಗಳಿಂದ ಮಕ್ಕಳ ಸಂರಕ್ಷಣಾ ಕಾಯ್ದೆ–2012' (ಪೋಕ್ಸೋ ಕಾಯ್ದೆ) |
| 4 | ಹುರುಕಲ್ಲಿ ಅಜ್ಜ ಕಾನೂನು ಕಾಲೇಜು, ಧಾರವಾಡ | 23.11.2019 | ಲೈಂಗಿಕ ಕಿರುಕುಳಗಳಿಂದ ಮಕ್ಕಳ ಸಂರಕ್ಷಣಾ ಕಾಯ್ದೆ–2012' (ಪೋಕ್ಸೋ ಕಾಯ್ದೆ) |
| 5 | ಬ್ಯಾಂಕ್ವೆಟ್ ಹಾಲ್, ವಿಧಾನಸೌಧ, ಬೆಂಗಳೂರು | 26.11.2019 | ಸಂವಿಧಾನ ದಿನಾಚರಣೆಯ ಅಂಗವಾಗಿ ಕಾಸಂಸು ಪುಸ್ತಕ ಪ್ರದರ್ಶನ. |
| 6 | ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಿಬ್ಬಂದಿಗಳು ಹಾಗೂ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಕಾವೇರಿ ಭವನ, ಬೆಂಗಳೂರು | 26.11.2019 | ಕಾಸಂಸು ಸಿಬ್ಬಂದಿಗಳು ಮತ್ತು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಅಧಿಕಾರಿಗಳು ಹಾಗೂ ನೌಕರರುಗಳೊಂದಿಗೆ "ಸಂವಿಧಾನ ದಿನಾಚರಣೆ" ಆಚರಣೆಯನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಕಾವೇರಿ ಭವನದಲ್ಲಿ ಆಚರಣೆ ಮಾಡಲಾಯಿತು. |
| 7 | ಎಸ್.ಸಿ.ನಂದಿಮಠ ಕಾನೂನು ಕಾಲೇಜು, ಬಾಗಲಕೋಟೆ, | 01.12.2019 | ಲೈಂಗಿಕ ಕಿರುಕುಳಗಳಿಂದ ಮಕ್ಕಳ ಸಂರಕ್ಷಣಾ ಕಾಯ್ದೆ–2012' (ಪೋಕ್ಸೋ ಕಾಯ್ದೆ) |
| 8 | ವಿವೇಕಾನಂದ ಕಾನೂನು ಕಾಲೇಜು, ಪುತ್ತೂರು | 07.12.2019 | ಲೈಂಗಿಕ ಕಿರುಕುಳಗಳಿಂದ ಮಕ್ಕಳ ಸಂರಕ್ಷಣಾ ಕಾಯ್ದೆ–2012' (ಪೋಕ್ಸೋ ಕಾಯ್ದೆ) |

| | | | |
|---|---|---|---|
| 9 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ), ಬಹುಮಹಡಿಗಳ ಕಟ್ಟಡ, ಬೆಂಗಳೂರು. | 21.12.2019 | ಕರ್ನಾಟಕ ಸಚಿವಾಲಯ ಅಧಿಕಾರಿಗಳು ಮತ್ತು ಸಿಬ್ಬಂದಿಗಳಿಗೆ "ಡಾ. ಬಿ.ಆರ್ ಅಂಬೇಡ್ಕರ್ ರವರ ಜೀವನ ಚರಿತ್ರೆ ಮತ್ತು ಭಾರತ ಸಂವಿಧಾನ" ರಸ ಪ್ರಶ್ನೆ ಸ್ಪರ್ಧಾ ಕಾರ್ಯಕ್ರಮ |
| 10 | ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಿಬ್ಬಂದಿಗಳು ಹಾಗೂ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಕಾವೇರಿ ಭವನ, ಬೆಂಗಳೂರು | 24.01.2020 | ಕಾಸಂಸು ಸಿಬ್ಬಂದಿಗಳು ಮತ್ತು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಅಧಿಕಾರಿಗಳು ಹಾಗೂ ನೌಕರರುಗಳೊಂದಿಗೆ "ರಾಷ್ಟ್ರೀಯ ಮತದಾರರ ದಿನಾಚರಣೆ"ಯನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಕಾವೇರಿ ಭವನದಲ್ಲಿ ಆಚರಣೆ ಮಾಡಲಾಯಿತು. |
| 11 | ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಕಲಬುರಗಿ ಜಿಲ್ಲಾ ನ್ಯಾಯಾಂಗ, ಕಲಬುರಗಿ | 09.02.2020 | ಲೈಂಗಿಕ ಕಿರುಕುಳಗಳಿಂದ ಮಕ್ಕಳ ಸಂರಕ್ಷಣಾ ಕಾಯ್ದೆ–2012' (ಪೋಕ್ಸೋ ಕಾಯ್ದೆ) |
| 12 | ಸರಸ್ವತಿ ಕಾನೂನು ಕಾಲೇಜು, ಚಿತ್ರದುರ್ಗ | 08.03.2020 | ಲೈಂಗಿಕ ಕಿರುಕುಳಗಳಿಂದ ಮಕ್ಕಳ ಸಂರಕ್ಷಣಾ ಕಾಯ್ದೆ–2012' (ಪೋಕ್ಸೋ ಕಾಯ್ದೆ) |

| 3) 2020–21ನೇ ಸಾಲಿನ ಕಾರ್ಯಕ್ರಮಗಳು | | | |
|---|---|---|---|
| ಕ್ರ ಸಂ | ಕಾಲೇಜಿನ ಹೆಸರು | ದಿನಾಂಕ | ವಿಷಯ |
| 1 | ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ಸಿಬ್ಬಂದಿಗಳು ಹಾಗೂ ವಿಶೇಷ ಕಾರ್ಯದರ್ಶಿ ಕಾನೂನು ಇಲಾಖೆಯ ನೌಕರರು, ವಿಧಾನಸೌಧ, ಬೆಂಗಳೂರು | 26.11.2019 | ಕಾಸಂಸು ಸಿಬ್ಬಂದಿಗಳು ಮತ್ತು ವಿಶೇಷ ಕಾರ್ಯದರ್ಶಿ ಕಾನೂನು ಇಲಾಖೆಯ ನೌಕರರೊಂದಿಗೆ "ಸಂವಿಧಾನ ದಿನಾಚರಣೆ" ಆಚರಣೆಯನ್ನು ವಿಧಾನಸೌಧ 2ನೇಮಹಡಿಯ ವಿಶೇಷ ಕಾರ್ಯದರ್ಶಿಗಳ ಕಛೇರಿಯಲ್ಲಿ ಆಚರಣೆ ಮಾಡಲಾಯಿತು. |
| 2 | ಇಂಟರ್ ನ್ಯಾಷನಲ್ ಜಸ್ಟಿಸ್ ಮಿಷನ್, ಬೆಂಗಳೂರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಕಾವೇರಿ ಭವನ, ಬೆಂಗಳೂರು. ಹಾಗೂ ಕಾಸಂಸು ಸಂಸ್ಥೆ, ಬೆಂಗಳೂರು | 05.12.2020 | ಕೋವಿಡ್–19ರ ಸಾಂಕ್ರಾಮಿಕದ ಕಾರಣದಿಂದಾಗಿ ವೆಬಿನಾರ್‌ಗಳ ಮೂಲಕ ಹೆಚ್ಚಿನ ತಿಳುವಳಿಕೆಯ ಕಾರ್ಯಕ್ರಮದ ಭಾಗವಾಗಿ "ಜೀತಪದ್ಧತಿ ಮತ್ತು ಮಾನವ ಕಳ್ಳ ಸಾಗಾಣಿಕೆ" ವರ್ಚುವಲ್ ತರಬೇತಿಯನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಅಭಿಯೋಜಕರಿಗೆ-ಅಧಿಕಾರಿಗಳಿಗಾಗಿ ಡಿ.ಓ.ಪಿ ಮತ್ತು ಐ.ಜೆ.ಎಂ (ಇಂಟರ್ ನ್ಯಾಷನಲ್ ಜಸ್ಟಿಸ್ ಮಿಷನ್) ಏರ್ಪಡಿಸಲಾಯಿತು ಹಾಗೂ ಇದರಲ್ಲಿ ಕಾಸಂಸು ಸಿಬ್ಬಂದಿಗಳು ಭಾಗವಹಿಸಿದ್ದರು. |

(ಕೆ. ದ್ವಾರಕನಾಥ್ ಬಾಬು)
ನಿರ್ದೇಶಕರು
ಕರ್ನಾಟಕ ಕಾನೂನು ಮತ್ತು ಸಂಸದೀಯ
ಸುಧಾರಣಾ ಸಂಸ್ಥೆ